ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೊಂದನೆಯ ಅಧಿವೇಶನ

ಶುಕ್ರವಾರ, ದಿನಾಂಕ: 25ನೇ ಸೆಪ್ಟಂಬರ್, 2020

ಕೊರೋನಾ ವೈರಸ್ ಸಂಕಷ್ಟದಿಂದ ಕೈಮಗ್ಗ ಜವಳಿ ನೇಕಾರರ ಹೀನಾಯ ಸ್ಥಿತಿ ಕುರಿತು

ಶ್ರೀ ಹೆಚ್.ಎಂ.ರಮೇಶಗೌಡ (ವಿಧಾನಸಭೆಯಿಂದ ಚುನಾಯಿತರಾದವರು):-

681 (751) ಮಾನ್ಯ ಕೈಮಗ್ಗ ಮತ್ತು ಜವಳಿ ಹಾಗೂ ಅಲ್ಪಸಂಖ್ಯಾತರ ಕಲ್ಯಾಣ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕೊರೋನಾ ವೈರಸ್ ಸಂಕಷ್ಟದಿಂದ ಕೈಮಗ್ಗ, ನೇಕಾರಿಕೆ ಮತ್ತು ಜವಳಿ ಉದ್ಯಮ ಅತ್ಯಂತ ಹೀನಾಯ ಸ್ಥಿತಿ ತಲುಪಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಚೇತರಿಕೆಗೆ ಸರ್ಕಾರ ಯಾವ ಕ್ರಮ ಕೈಗೊಳ್ಳಲಾಗಿದೆ ;

(ಆ) ರಾಜ್ಯದಲ್ಲಿ ಗ್ರಾಮೀಣ ನೇಕಾರರು ಆರ್ಥಿಕ ಸಂಕಷ್ಟ ತಾಳಲಾರದೇ ತಮ್ಮ ಕೈಮಗ್ಗಗಳಿಗೆ ನೇಣು ಹಾಕಿಕೊಂಡು ಸಾವನ್ನಪಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಈ ಅತಂತ್ರ ಸ್ಥಿತಿಯಲ್ಲಿರುವ ನೇಕಾರರ ಬದುಕು ಸುಧಾರಿಸಲು ಯಾವ ಕಾರ್ಯಕ್ರಮ ರೂಪಿಸಲಾಗಿದೆ ;

(ಇ) ರಾಜ್ಯದ ಜವಳಿ ಉದ್ಯಮದ ಚೇತರಿಕೆಗೆ ಈವರೆಗೆ ಮೀಸಲಿಟ್ಟ ಹಣವೆಷ್ಟು ; ಖರ್ಚಾದ ಹಣವೆಷ್ಟು ;

(ಈ) ಗ್ರಾಮೀಣ ನೇಕಾರರ ಉತ್ತೇಜನಕ್ಕೆ ಸರ್ಕಾರ ಆರ್ಥಿಕ ನೆರವಿನ ಪ್ಯಾಕೇಜ್ ಘೋಷಿಸಲಿದೆಯೇ ? (ವಿವರ ನೀಡುವುದು)